ಉತ್ಸವಂ ಕಾರಯಾಮಾಸ ಸ್ವಾಮಿವೃದ್ಧ್ಯೈ ಮನೋರಮಂ ।
ಗ್ರಾಮಂ ಪ್ರದಕ್ಷಿಣೀಕೃತ್ಯ ಶಿಬಿಕಾಮಧಿರೋಪ್ಯ ತಂ ॥ ೫೬ ॥
ಚತುರಂಗಬಲೈರ್ಯುಕ್ತಃ ಸ್ವಯಂ ಪೃಷ್ಠಮಥಾನ್ವಗಾತ್ ।
ಪುನಶ್ಚಾಂತಃಪುರಂ ಪ್ರಾಪ್ಯ ಸಕಲೈರ್ವಿಭವೈರಪಿ ॥ ೫೭ ॥
ವಸ್ತ್ರೈರಾಭರಣೈಶ್ಚೈವ ಗೋಭೂತಿಲಹಿರಣ್ಯಕೈಃ ।
ಪ್ರಣಮ್ಯ ಚ ಪರಿಕ್ರಮ್ಯ ತಸ್ಥೌ ಪ್ರಾಂಜಲಿರಗ್ರತಃ ॥ ೫೮ ॥
ತತಃ ಸ ತು ಮಹಾತೇಜಾಃ ಶ್ರುತದೇವೋ ಮಹಾಯಶಾಃ ।
ಸಂತುಷ್ಟಃ ಪರಮಪ್ರೀತೋ ಯಯೌ ಧಾಮ ಸ್ವಕಂ ಮುನಿಃ ॥ ೫೯ ॥
ತ್ರಯೋದಶ್ಯಾಂ ಚತುರ್ದಶ್ಯಾಂ ಪೌರ್ಣಮಾಸ್ಯಾಂ ಚ ಮಾಧವೇ ।
ಸ್ನಾನಂ ದಾನಂ ಭೋಜನಂ ಚ ಕಥಾಶ್ರವಣಮೇವ ಚ ॥ ೬೦ ॥
ವೈಶಾಖಧರ್ಮನಿರತಃ ಸ ವೈ ಮೋಕ್ಷಮವಾಪ್ನುಯಾತ್ ।
ಧನಶರ್ಮಾ ಬ್ರಾಹ್ಮಣಶ್ಚ ಪ್ರೇತಾಶ್ಚೈವ ಯಥಾ ಪುರಾ ॥ ೬೧ ॥

---

೫೬–೫೮. ಬಳಿಕ ತನ್ನ ವಂಶದ ಅಭಿವೃದ್ಧಿಗಾಗಿಯೇ ಆ ಬ್ರಾಹ್ಮಣನಿಗೆ ಮನೋಹರವಾದ ಉತ್ಸವವನ್ನು ಮಾಡಿಸಿದನು. ಆತನನ್ನು ಒಂದು ಪಲ್ಲಕ್ಕಿಯಲ್ಲಿ ಕೂಡಿಸಿ ಗ್ರಾಮ ಪ್ರದಕ್ಷಿಣೆಯನ್ನು ಮಾಡಿಸುತ್ತ ತಾನೂ ಚತುರಂಗ ಸೈನ್ಯಸಮೇತನಾಗಿ ಅದರ ಹಿಂದೆಯೇ ಮೆರವಣಿಗೆಯಲ್ಲಿ ಬರುತ್ತಿದ್ದನು. ಆ ಮೇಲೆ ಪುನಃ ಆತನನ್ನು ಅಂತಃಪುರದೊಳಗೆ ಕರೆದುಕೊಂಡು ಹೋಗಿ ತನ್ನ ಸಕಲ ವೈಭವವನ್ನೂ ಅರ್ಪಿಸಿ ವಸ್ತ್ರಗಳಿಂದಲೂ, ಆಭರಣಗಳಿಂದಲೂ, ಗೋಭೂತಿಲಹಿರಣ್ಯಾದಿ ದಶಮಹಾದಾನಗಳಿಂದಲೂ ಆತನನ್ನು ಪೂಜೆಮಾಡಿ ಸಾಷ್ಟಾಂಗನಮಸ್ಕಾರವನ್ನು ಮಾಡಿ ಪ್ರದಕ್ಷಿಣೆಗೈದು ಅಂಜಲಿಬಂಧವನ್ನು ಮಾಡಿಕೊಂಡು ಆತನೆದುರಿನಲ್ಲಿ ವಿನೀತನಾಗಿ ನಿಂತಿದ್ದನು.

೫೯. ಬಳಿಕ ಮಹಾತೇಜಸ್ಸಂಪನ್ನನೂ ಪ್ರಖ್ಯಾತ ಯಶಸ್ಸುಳ್ಳವನೂ ಆದ ಆ ಶ್ರುತದೇವಬ್ರಾಹ್ಮಣನು ಸಂತೋಷಗೊಂಡು ಆತನಲ್ಲಿ ಪರಮಾನುಗ್ರಹವನ್ನು ಮಾಡಿ ತನ್ನ ನಿವಾಸವನ್ನು ಕುರಿತು ಹೊರಟುಹೋದನು.

೬೦–೬೧. ಯಾವನು ವೈಶಾಖಮಾಸದ ಶುಕ್ಲಪಕ್ಷದ ತ್ರಯೋದಶಿ, ಚತುರ್ದಶಿ ಮತ್ತು ಪೌರ್ಣಿಮೆಗಳಲ್ಲಿ ಬಹಿಸ್ತೀರ್ಥಸ್ನಾನವನ್ನೂ ಶಕ್ತ್ಯನುಸಾರವಾದ ದಾನಗಳನ್ನೂ, ವಿಷ್ಣುಪೂಜೆಯನ್ನೂ, ವಿಷ್ಣುಸತ್ಕಥಾಶ್ರವಣವನ್ನೂ ಮಾಡುತ್ತ ವೈಶಾಖಮಾಸವ್ರತದ ಧರ್ಮಗಳಲ್ಲಿಯೇ ನಿರತನಾಗಿರುವನೊ, ಅವನು ಬ್ರಾಹ್ಮಣನಾದ ಧನಶರ್ಮನೂ ಪ್ರೇತಗಳೂ ಹಿಂದೆ ಮುಕ್ತರಾದಂತೆ ತಾನೂ ಮೋಕ್ಷಸಾಮ್ರಾಜ್ಯವನ್ನು ಪಡೆಯುವನು.

ನಾರದ ಉವಾಚ :—

ಇತ್ಯೇತತ್ಪರಮಾಖ್ಯಾನಮಂಬರೀಷ ತವೋದಿತಂ ।
ಶ್ರವಣಾತ್ಸರ್ವಪಾಪಘ್ನಂ ಸರ್ವಸಂಪದ್ವಿಧಾಯಕಂ ॥ ೬೨ ॥
ತೇನ ಭುಕ್ತಿಂ ಚ ಮುಕ್ತಿಂ ಚ ಜ್ಞಾನಂ ಮೋಕ್ಷಂ ಚ ವಿಂದತಿ ॥ ೬೩ ॥
ಇತಿ ತಸ್ಯ ವಚಃ ಶ್ರುತ್ವಾ ಅಂಬರೀಷೋ ಮಹಾಯಶಾಃ ।
ಪ್ರಹೃಷ್ಟಾಂತರವೃತ್ತಿಶ್ಚ ಬಾಹ್ಯವ್ಯಾಪಾರವರ್ಜಿತಃ ॥ ೬೪ ॥
ಪ್ರಣನಾಮ ತಥಾ ಮೂರ್ಧ್ನಾ ದಂಡವತ್ಪತಿತೋ ಭುವಿ ।
ವಿಭವೈರಖಿಲೈಶ್ಚಾಪಿ ಪೂಜಯಾಮಾಸ ತಂ ಪುನಃ ॥ ೬೫ ॥
ಸಂಪೂಜಿತಸ್ತಮಾಮಂತ್ರ್ಯ ನಾರದೋ ಭಗವಾನ್ಮುನಿಃ ।
ಲೋಕಾಂತರಂ ಯಯೌ ಧೀಮಾನ್ ಶಾಪಾನ್ನೈಕತ್ರ ಸಂಸ್ಥಿತಿಃ ॥ ೬೬ ॥
ಅಂಬರೀಷೋऽಪಿ ರಾಜರ್ಷಿರ್ನಾರದೋಕ್ತಾನ್ ಇಮಾನ್ ಶುಭಾನ್ ।
ಧರ್ಮಾನ್ ಕೃತ್ವಾ ವಿಲೀನೋ ಭೂತ್ ಪರೇ ಬ್ರಹ್ಮಣಿ ನಿರ್ಗುಣೇ ॥ ೬೭ ॥

---

೬೨-೬೩. ನಾರದನು ಹೇಳುತ್ತಾನೆ:—"ಎಲೈ ಅಂಬರೀಷ ಮಹಾರಾಜನೆ! ಇಂತು ನಿನಗೆ ಸರ್ವೋತ್ತಮವಾದ ಆಖ್ಯಾನವನ್ನು ವಿಸ್ತಾರವಾಗಿ ತಿಳಿಸಿರುವೆನು. ಈ ಚರಿತ್ರೆಯು ಕೇಳುವ ಮಾತ್ರದಿಂದಲೇ ಸಕಲ ಪಾತಕಗಳನ್ನೂ ನಿರ್ಮೂಲ ಗೊಳಿಸಿ ಸಕಲೈಶ್ವರ್ಯಗಳನ್ನೂ ಕೈಗೂಡಿಸುವುದು. ಇದರ ಶ್ರವಣದಿಂದ ಭುಕ್ತಿಯನ್ನೂ, ಸ್ವರ್ಗವನ್ನೂ, ಜ್ಞಾನವನ್ನೂ, ಮೋಕ್ಷವನ್ನೂ ಮನುಷ್ಯನು ಪಡೆಯುವನು."

೬೪. ಇಂತೆಂದ ನಾರದನ ಮಾತುಗಳನ್ನು ಕೇಳಿ ಮಹಾ ಯಶಸ್ವಿಯಾದ ಅಂಬರೀಷ ಮಹಾರಾಜನು ತನ್ನ ಅಂತರಂಗವೆಲ್ಲವೂ ಸಂತೋಷದಿಂದ ತುಂಬಿ ತುಳುಕುತ್ತಿರಲು ಲೌಕಿಕ ವ್ಯಾಪಾರವನ್ನೇ ಮರೆತು ನಿಂತಿದ್ದನು.

೬೫. ಕೆಲವು ಕಾಲದ ಮೇಲೆ ದಂಡದಂತೆ ಭೂಮಿಯಲ್ಲಿ ಬಿದ್ದು ತಲೆಯನ್ನು ಆತನ ಪಾದಗಳಲ್ಲಿಟ್ಟು ಸಾಷ್ಟಾಂಗಪ್ರಣಾಮವನ್ನು ಮಾಡಿದನು. ಬಳಿಕ ತನ್ನ ಅಖಿಲ ವೈಭವಗಳಿಂದಲೂ ಆತನಿಗೆ ಅನೇಕ ವಿಧವಾದ ಸತ್ಕಾರವನ್ನೆಸಗಿದನು.

೬೬. ಆತನ ಪೂಜೆಯೆಲ್ಲವನ್ನೂ ಸ್ವೀಕರಿಸಿ ಸರ್ವಜ್ಞನಾದ ನಾರದ ಮಹರ್ಷಿಯು ಲೋಕಾಂತರವನ್ನು ಕುರಿತು ಹೊರಟುಹೋದನು. ಬುದ್ಧಿಸಾಗರ ನಾದ ಆತನಿಗೂ ಶಾಪದ ಫಲವಾಗಿ ಒಂದೆಡೆಯಲ್ಲಿ ನಿಲ್ಲಲು ಅವಕಾಶವಿಲ್ಲವಷ್ಟೆ.

೬೭. ಅಂಬರೀಷ ಮಹಾರಾಜನೂ ನಾರದನಿಂದ ಉಪದೇಶಿಸಲ್ಪಟ್ಟ ಪವಿತ್ರಗಳಾದ ಈ ವೈಶಾಖ ಧರ್ಮಗಳೆಲ್ಲವನ್ನೂ ಸಮಗ್ರವಾಗಿ ಆಚರಿಸಿದವನಾಗಿ ತ್ರಿಗುಣಾತೀತವಾದ ಪರಬ್ರಹ್ಮ ವಸ್ತುವಿನಲ್ಲಿ ಸ್ವರೂಪಲಯವನ್ನು ಹೊಂದಿದನು.

ಸೂತ ಉವಾಚ :—

ಯ ಇದಂ ಪರಮಾಖ್ಯಾನಂ ಪಾಪಘ್ನಂ ಪುಣ್ಯವರ್ಧನಂ ।
ಶೃಣುಯಾದ್ವಾ ಪಠೇದ್ವಾಪಿ ಸ ಯಾತಿ ಪರಮಾಂ ಗತಿಂ ॥ ೬೮ ॥
ಲಿಖಿತಂ ಪುಸ್ತಕಂ ಯೇಷಾಂ ಗೃಹೇ ತಿಷ್ಠತಿ ಮಾನದಾಃ ।
ತೇಷಾಂ ಮುಕ್ತಿಃ ಕರಸ್ಥಾ ಹಿ ಕಿಮು ತಚ್ಛ್ರವಣಾತ್ಮನಾಂ ॥ ೬೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ದ್ವಿತೀಯೇ ವೈಷ್ಣವಖಂಡೇ ವೈಶಾಖಮಾಸಮಾಹಾತ್ಮ್ಯೇ ನಾರದಾಂಬರೀಷಸಂವಾದೇ "ಫಲಶ್ರುತಿಕಥನಂ" ನಾಮ ಪಂಚವಿಂಶೋಽಧ್ಯಾಯಃ

ವೈಶಾಖಮಾಸಮಾಹಾತ್ಮ್ಯಂ ಸಂಪೂರ್ಣಂ

---

೬೮. ಸೂತನು ಹೇಳುತ್ತಾನೆ:—ಸಮಸ್ತ ಕಲ್ಮಷಾಪನೋದಕವೂ ಪುಣ್ಯ ವರ್ಧಕವೂ ಆದ ಈ ಸರ್ವೋತ್ತಮವಾದ ಉಪಾಖ್ಯಾನವನ್ನು ಯಾವ ಮನುಷ್ಯನು ಕೇಳುವನೊ, ಅಥವಾ ಓದುವನೊ, ಅವನು ಪರಾತ್ಪರವಾದ ವೈಕುಂಠಪದವನ್ನು ಸೇರುವನು.

೬೯. ಎಲೈ ಮಹರ್ಷಿಗಳಿರಾ! ಈ ಉಪಾಖ್ಯಾನದ ಕೈಬರಹದ ಪುಸ್ತಕವು ಯಾರ ಮನೆಯಲ್ಲಿ ಪೂಜಿಸಲ್ಪಡುತ್ತಿರುವುದೊ, ಅವರಿಗೇ ಮುಕ್ತಿಯು ಕರತಲಾಮಲಕದಂತೆ ಸುಲಭವಾಗಿರುವುದೆಂದಮೇಲೆ ಅದರ ಶ್ರವಣದಲ್ಲಿ ಆಸಕ್ತಿಯುಳ್ಳ ಮಾನವರ ವಿಷಯವನ್ನು ಬೇರೆ ಹೇಳಲೇಕೆ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಎರಡನೆಯ ವೈಷ್ಣವಖಂಡದ ವೈಶಾಖಮಾಸಮಾಹಾತ್ಮ್ಯದ ನಾರದಾಂಬರೀಷಸಂವಾದದಲ್ಲಿ "ಫಲಶ್ರುತಿ ಕಥನ"ವೆಂಬ ಇಪತ್ತೈದನೆಯ ಅಧ್ಯಾಯವು ಮುಗಿದುದು

ವೈಶಾಖಮಾಸಮಾಹಾತ್ಮ್ಯವು ಸಂಪೂರ್ಣವಾದುದು